# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 188 |
| ಮಾನ್ಯ ಸದಸ್ಯರ ಹೆಸರು | ಶ್ರೀ.ಬಿ.ಕೆ ಹರಿಪ್ರಸಾದ್<br>(ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 01.02.2021 |
| ಉತ್ತರಿಸುವ ಸಚಿವರು | ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ವೈದ್ಯರ ಮತ್ತು ಜನರ ಸರಾಸರಿ ಪ್ರಮಾಣವೆಷ್ಟು? | 2020ರ ಅಂತ್ಯಕ್ಕೆ ರಾಜ್ಯದ ಒಟ್ಟು ಜನಸಂಖ್ಯೆ:7.07 ಕೋಟಿಗಳಾಗಿರುತ್ತದೆ. ರಾಜ್ಯದಲ್ಲಿ ಒಟ್ಟು 57,844 ವೈದ್ಯರುಗಳು ಇರುತ್ತಾರೆ. [ಖಾಯಂ, ಗುತ್ತಿಗೆ, ಎನ್.ಹೆಚ್.ಎಂ (ಗುತ್ತಿಗೆ), ಖಾಸಗಿ ಮತ್ತು ವೈದ್ಯಕೀಯ ಶಿಕ್ಷಣ ಇಲಾಖೆಯ ವೈದ್ಯರುಗಳನ್ನೊಳಗೊಂಡಂತೆ].<br>ಪ್ರತಿ ಒಂದು ಲಕ್ಷದ ಜನಸಂಖ್ಯೆಗೆ 82 ಜನ ವೈದ್ಯರ ಸರಾಸರಿ ಇರುತ್ತದೆ. |
| ಆ) | ವಿಶ್ವ ಆರೋಗ್ಯ ಸಂಸ್ಥೆಯ ಪ್ರಕಾರ ಸರಾಸರಿ ಎಷ್ಟು ಜನರಿಗೆ ಒಬ್ಬ ವೈದ್ಯರಿರಬೇಕು? | ವಿಶ್ವ ಆರೋಗ್ಯ ಸಂಸ್ಥೆಯ ಮಾನದಂಡದ ಪ್ರಕಾರ ಸರಾಸರಿ 1,000 ಜನರಿಗೆ ಒಬ್ಬ ವೈದ್ಯರಿರಬೇಕು (1:1000). |
| ಇ) | ರಾಜ್ಯದಲ್ಲಿ ಸರಾಸರಿ ಪ್ರಮಾಣ ಕಡಿಮೆ ಇರಲು ಕಾರಣಗಳೇನು? | ರಾಜ್ಯದಲ್ಲಿ ವೈದ್ಯರು ಹೆಚ್ಚಿನ ಸಂಖ್ಯೆಯಲ್ಲಿ ನಗರ ಪ್ರದೇಶದಲ್ಲಿಯೇ ಇದ್ದು, ಗ್ರಾಮೀಣ ಹಾಗೂ ಒಳಭಾಗದ ಪ್ರದೇಶಗಳಲ್ಲಿ ಕರ್ತವ್ಯ ನಿರ್ವಹಿಸಲು ಆಸಕ್ತಿ ತೋರಿಸದಿರುವುದು ಪ್ರಮುಖ ಕಾರಣ. |
| ಈ) | ಈ ಅಸಮಾನ ಪ್ರಮಾಣವನ್ನು ಸರಿದೂಗಿಸಲು ಸರ್ಕಾರ ಕೈಗೊಂಡ ಕ್ರಮಗಳೇನು? | ಈ ಅಸಮಾನ ಪ್ರಮಾಣವನ್ನು ಸರಿದೂಗಿಸಲು ಸರ್ಕಾರ ಈ ಕೆಳಕಂಡ ಕ್ರಮಗಳನ್ನು ಕೈಗೊಂಡಿರುತ್ತದೆ.<br>➢ ರಾಜ್ಯದಲ್ಲಿ ಖಾಲಿ ಇರುವ ವೈದ್ಯಾಧಿಕಾರಿಗಳ ಹುದ್ದೆಗಳನ್ನು ಭರ್ತಿ ಮಾಡಲು ವಿಶೇಷ ನೇಮಕಾತಿ ಸಮಿತಿ ರಚಿಸಿ ಸದರಿ ಸಮಿತಿಯ ಅಧಿಸೂಚನೆ ಸಂಖ್ಯೆ: SRC/68/2019-20, ದಿನಾಂಕ:10-09-2020ರನ್ವಯ 847 ತಜ್ಞ ವೈದ್ಯರುಗಳು, 1246, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ಮತ್ತು 88 ದಂತ ಆರೋಗ್ಯಾಧಿಕಾರಿಗಳ ಹುದ್ದೆಗಳನ್ನು ಹಾಗೂ ಬ್ಯಾಕ್‌ಲಾಗ್‌ನಲ್ಲಿ 657 ಹುದ್ದೆಗಳಿಗೆ ನೇಮಕಾತಿ ಪ್ರಕ್ರಿಯೆ ಬಹುತೇಕ ಪೂರ್ಣಗೊಂಡಿದ್ದು, ಭರ್ತಿ |

| | | |
|---|---|---|
| | | ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ.<br>➢ ಜಿಲ್ಲಾ ಮಟ್ಟದಲ್ಲಿ ಖಾಲಿ ಇರುವ ವೈದ್ಯ ಹುದ್ದೆಗಳನ್ನು ಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡಲು ಸಂಬಂಧಿಸಿದ ಜಿಲ್ಲಾಧಿಕಾರಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಲಾಗಿದೆ.<br>➢ ನಿವೃತ್ತ ವೈದ್ಯರ ಮರು ನೇಮಕಾತಿಗೆ ಅವಕಾಶ ಕಲ್ಪಿಸಲಾಗಿದೆ.<br>➢ ತಜ್ಞ ವೈದ್ಯರ ಕೊರತೆ ನೀಗಿಸಲು CPS ಮತ್ತು DNB ಕೋರ್ಸ್‌ಗಳನ್ನು ಪ್ರಾರಂಭಿಸಲಾಗಿರುತ್ತದೆ.<br>➢ ಖಾಸಗಿ ತಜ್ಞ ವೈದ್ಯರ ಸೇವೆಯನ್ನು ಕರೆ ಆಧಾರದ ಮೇಲೆ (On Call Basis) ಪಡೆಯಲಾಗುತ್ತಿದೆ ಹಾಗೂ ಅವರಿಗೆ ಪ್ರಕರಣಗಳ ಆಧಾರದ ಮೇಲೆ ಗೌರವಧನ ನೀಡಲಾಗುತ್ತಿದೆ.<br>➢ ತಜ್ಞ ವೈದ್ಯರ ಕೊರತೆ ನೀಗಿಸಲು, ಸೇವಾನಿರತ ಕೋಟಾದಡಿ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸುವ ಸಂಬಂಧ ನಿಯಮಗಳನ್ನು ಸಡಿಲಿಸಿ, ಖಾಯಂ ಪೂರ್ವ ಅವಧಿ ಘೋಷಣೆಯಾದ ಮತ್ತು ಯಾವುದೇ ಇಲಾಖಾ ವಿಚಾರಣೆ ಇರದ ಸರ್ಕಾರಿ ವೈದ್ಯರಿಗೆ ಅವಕಾಶ ಕಲ್ಪಿಸಿದೆ. |

**ಆಕುಕ 03 ಹೆಚ್‌ಎಸ್‌ಡಿ 2021**

(ಡಾ॥ ಕೆ ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು